CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೧೫, ೨೦೦೫ (ಮಾರ್ಗಶಿರ ೨೪, ಶಕವರ್ಷ ೧೯೨೭) | ಸಂಚಿಕೆ ೪೯

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಭದ್ರಾವತಿ ಅರಣ್ಯ ವಿಭಾಗ**
**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ಸಂಖ್ಯೆ: ಎ2.ಬಿಯುಡಿ.ಸಿಆರ್-37/2005-06, ದಿನಾಂಕ: 6ನೇ ಡಿಸೆಂಬರ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಭದ್ರಾವತಿ ಅರಣ್ಯ ವಿಭಾಗದ ಶಾಂತಿಸಾಗರ ವಲಯದ ಕಛೇರಿ ಕಟ್ಟಡವನ್ನು ನಲ್ಲೂರಿನಲ್ಲಿ ನಿರ್ಮಾಣ ಮಾಡಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಅರಣ್ಯ ಗುತ್ತಿಗೆದಾರರು ದಿನಾಂಕ: 23.12.2005ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಭದ್ರಾವತಿ ವಿಭಾಗ, ಭದ್ರಾವತಿ ಇವರಿಗೆ ಸಲ್ಲಿಸಲು ಕೋರಿದೆ.

| ಕ್ರ.ಸಂ. | ವಲಯ | ಯೂನಿಟ್ ನಂ. | ಕಾಮಗಾರಿ ವಿವರ | ಅಂದಾಜು ಮೊತ್ತ | ಠೇವಣಿ |
|---|---|---|---|---|---|
| 1 | ಶಾಂತಿ ಸಾಗರ ವಲಯದ ನಲ್ಲೂರು. | 1 | ಹೊಸದಾಗಿ ಕಛೇರಿ ಕಟ್ಟಡ ನಿರ್ಮಾಣ | 8.00 ಲಕ್ಷ | 16,000.00 |

**ನಿಬಂಧನೆಗಳು:**

1. ಭದ್ರಾವತಿ ಅರಣ್ಯ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. 12.00 ರೂ. ಪಾವತಿಸಿ ಟೆಂಡರ್ ಫಾರಂನ್ನು ದಿನಾಂಕ: 23.12.2005 ರಂದು ಈ ಕಛೇರಿಯಿಂದ ಪಡೆಯಬಹುದು. ದರವನ್ನು ಮಂಜೂರಾದ ಅನುಸೂಚಿ ದರದ ಮೇಲೆ ಶೇಕಡ ಇಂತಿಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ನಮೂದಿಸಬೇಕು.
2. ಕಾಮಗಾರಿ ಕಾಲಾವಧಿ 31.3.2006.
3. ಹೆಚ್ಚಿನ ಮಾಹಿತಿಯನ್ನು ಕಛೇರಿಯಲ್ಲಿ ಪಡೆಯಬಹುದು.

**ಎ. ರಾಧಾದೇವಿ**
ಪಿ.ಆರ್. 674 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

**ಭದ್ರಾವತಿ ಅರಣ್ಯ ವಿಭಾಗ**
**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಭದ್ರಾವತಿ ವಿಭಾಗ, ಭದ್ರಾವತಿ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ಸಂಖ್ಯೆ: ಎ2.ಬಿಯುಡಿ.ಸಿಆರ್-48/2005-06, ದಿನಾಂಕ: 9ನೇ ಡಿಸೆಂಬರ್ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2006ನೇ ಸಾಲಿನ ಮಳೆಗಾಲದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ ಅರಣ್ಯ ಪ್ರದೇಶದಲ್ಲಿ ನೆಡುತೋಪು ರಚನೆ ಮಾಡಲು ಮುಂಗಡ ರಿಪ್ಪಿಂಗ್, ಜಾನುವಾರು ನಿರೋಧಕ ಕಂದಕ, ಗುಂಡಿ ತೆಗೆಯುವುದು ಮತ್ತು ಸಸಿ ಬೆಳೆಸಲು ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕೆಂಪು ಮಣ್ಣು ಸರಬರಾಜು ಮಾಡುವ ಕಾಮಗಾರಿಗಳನ್ನು ನಿರ್ವಹಿಸಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ. ಆಸಕ್ತ ಅರಣ್ಯ ಗುತ್ತಿಗೆದಾರರು ದಿನಾಂಕ: 20.12.2005ರ ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಲಕೋಟೆಯಲ್ಲಿ ಟೆಂಡರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ಅರಣ್ಯ ವಿಭಾಗ, ಭದ್ರಾವತಿ ಇವರಿಗೆ ಸಲ್ಲಿಸಲು ಕೋರಿದೆ ಟೆಂಡರ್‌ದಾರರ ಸಮಕ್ಷಮದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆರೆಯಲಾಗುವುದು.

| ಕ್ರ. ಸಂ. | ವಲಯ | ಯೂನಿಟ್ ಸಂಖ್ಯೆ | ಕಾಮಗಾರಿಯ ವಿವರ | | | ಅಂದಾಜು ಮೊತ್ತ | ಇ.ಎಂ.ಡಿ. |
|---|---|---|---|---|---|---|---|
| 1 | 2 | 3 | 4 | | | 5 | 6 |
| | | | ರಿಪ್ಪಿಂಗ್ (ಮೀ.ಗಳಲ್ಲಿ) | ಗುಂಡಿ ತೆಗೆಯುವುದು 0.45 M3 | ಗುಂಡಿ ತೆಗೆಯುವುದು 0.60 M3 | | |
| 1 | ಭದ್ರಾವತಿ | 1 | 113000 | - | 4000 | 371400.00 | 7400.00 |
| | ಚನ್ನಗಿರಿ | 2 | 104000 | - | 4000 | 344900.00 | 6900.00 |
| | ಉಂಬ್ಳೆಬೈಲು | 3 | - | 76000 | 4000 | 395000.00 | 7900.00 |
| | ತರೀಕೆರೆ | 4 | - | 178000 | 9200 | 921700.00 | 18400.00 |
| | ಅಜ್ಜಂಪುರ | 5 | 122000 | - | 4000 | 389700.00 | 7800.00 |
| | ಶಾಂತಿಸಾಗರ | 6 | 186500 | - | 4000 | 677800.00 | 13500.00 |
| | | | ಜಾನುವಾರು ನಿರೋದಕ ಕಂದಕ ತೆಗೆಯುವುದು | | | | |
| 1 | ಭದ್ರಾವತಿ | 1 | 2880 ಮೀ. | | | 157500.00 | 3100.00 |
| | ಚನ್ನಗಿರಿ | 2 | 3600 ಮೀ. | | | 189000.00 | 3800.00 |
| | ಉಂಬ್ಳೆಬೈಲು | 3 | 3580 ಮೀ. | | | 195300.00 | 3900.00 |
| | ತರೀಕೆರೆ | 4 | 8424 ಮೀ. | | | 460700.00 | 9200.00 |
| | ಅಜ್ಜಂಪುರ | 5 | 3320 ಮೀ. | | | 236200.00 | 4700.00 |
| | ಶಾಂತಿಸಾಗರ | 6 | 6480 ಮೀ. | | | 354300.00 | 7100.00 |
| | | | ಸಸ್ಯ ಕ್ಷೇತ್ರಕ್ಕೆ ಮಿಶ್ರಣ ಸರಬರಾಜು ಮಾಡುವುದು | | | | |
| | | | ಗೊಬ್ಬರ ಘ.ಮಿ. | ಮರಳು ಘ.ಮಿ. | ಮಣ್ಣು ಘ.ಮಿ. | | |
| 1 | ಭದ್ರಾವತಿ | 1 | 29.826 | 29.826 | 59.652 | 31300.00 | 600.00 |
| | ಚನ್ನಗಿರಿ | 2 | 39.924 | 39.924 | 79.848 | 41900.00 | 800.00 |
| | ಉಂಬ್ಳೆಬೈಲು | 3 | 28.044 | 28.044 | 56.088 | 29400.00 | 600.00 |
| | ತರೀಕೆರೆ | 4 | 71.217 | 71.217 | 142.434 | 74800.00 | 1500.00 |
| | ಅಜ್ಜಂಪುರ | 5 | 31.608 | 31.608 | 63.216 | 33200.00 | 700.00 |
| | ಶಾಂತಿಸಾಗರ | 6 | 49.428 | 49.428 | 98.856 | 51900.00 | 1000.00 |

**ನಿಬಂಧನೆಗಳು:**

1) ಭದ್ರಾವತಿ ಅರಣ್ಯ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು. ದರಗಳನ್ನು ಮಂಜೂರಾದ ಅನುಸೂಚಿ ದರದ ಮೇಲೆ ಶೇಕಡ ಇಂತಿಷ್ಟು ಹೆಚ್ಚು ಅಥವಾ ಕಡಿಮೆ ಎಂಬುದನ್ನು ನಮೂದಿಸಬೇಕು.

2) **ಕಾಮಗಾರಿ ಕಾಲಾವಧಿ**

i) ರಿಪ್ಪಿಂಗ್, ಜಾನುವಾರು ನಿರೋಧಕ ಕಂದಕ, ಗುಂಡಿ ತೆಗೆಯುವುದು, ದಿನಾಂಕ: 31.01.2006 ರವರೆಗೆ.

ii) ಗೊಬ್ಬರ, ಮರಳು ಮತ್ತು ಮಣ್ಣು ಸರಬರಾಜು ಮಾಡಲು ದಿನಾಂಕ: 31.12.2005 ರವರೆಗೆ.

ಇತರೆ ಹೆಚ್ಚಿನ ವಿವರಗಳನ್ನು ವಿಭಾಗ ಕಛೇರಿಯಲ್ಲಿ ಪಡೆಯಬಹುದು.

**ಎ. ರಾಧಾದೇವಿ**

ಪಿ.ಆರ್. 675 ಉಪ ಅರಣ್ಯ ಸಂರಕ್ಷಣಾಧಿಕಾರಿ, ಭದ್ರಾವತಿ ವಿಭಾಗ, ಭದ್ರಾವತಿ.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಅಲ್ಪಾವಧಿ ಟೆಂಡರ್ ಪ್ರಕಟಣೆ

**ಸಂಖ್ಯೆ: ಕಾ.ಇಂ./ಬಿಡಿಯನ್-4 ಪಿ.ಬಿ-1:ಟೆಂಡರು ಪ್ರಕಟಣೆ:2005-06/3381/(ಬಿ), ದಿನಾಂಕ: 28ನೇ ನವೆಂಬರ್ 2005**

ಮೊಹರಾದ ಶೇಕಡಾವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೋಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

| | | |
|---|---|---|
| 1 | ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: | 21.12.2005 ಸಂಜೆ 5.30 ರವರೆಗೆ |
| 2 | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | 22.12.2005 ಹಾಗೂ 23.12.2005 ಸಂಜೆ 5.30 ರವರೆಗೆ |
| 3 | ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: | 23.12.2005 ಹಾಗೂ 24.12.2005 ಸಂಜೆ 4.00 ರವರೆಗೆ |
| 4 | ಕೆಲಸವನ್ನು ಮುಗಿಸುವ ಅವಧಿ | ಒಂದು ತಿಂಗಳು |

ಟೆಂಡರ್ ಫಾರಂಗಳನ್ನು ದಿನಾಂಕ: 24.12.2005 ಸಂಜೆ 4.00 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| | | ರೂ. | ರೂ. | ರೂ. | |
| 1 | ಗೊಂದಿ ಬಲದಂಡೆ ಕಾಲುವೆಯ ಸರಪಳಿ 46.25ನೇ ಕಿ.ಮೀ.ನಲ್ಲಿ ವೇಸ್ಟ್ ವಿಯರ್ ಹಳ್ಳದ ರಕ್ಷಣೆಯ ಕಾಮಗಾರಿ | 99,211/- | 2485/- | 200/- | ನಾಲ್ಕನೇ ದರ್ಜೆ ಮತ್ತು ಮೇಲ್ಪಟ್ಟು |
| 2 | ಗೊಂದಿ ಬಲದಂಡೆ ಕಾಲುವೆಯ ಸರಪಳಿ 64.00 ರಿಂದ 74.00 ನೇ ಕಿ.ಮೀ.ನವರೆಗೆ ಹೂಳು, ಜಂಗಲ್ ಮತ್ತು ವೀಡ್ಸ್ ತೆಗೆಯುವ ಕಾಮಗಾರಿ | 1,96,831/- | 4925/- | 300/- | ಮೂರನೇ ದರ್ಜೆ ಮತ್ತು ಮೇಲ್ಪಟ್ಟು |
| 3 | ಗೊಂದಿ ಬಲದಂಡೆ ಕಾಲುವೆಯ ಸರಪಳಿ 46.00 ರಿಂದ 54.00ನೇ ಕಿ.ಮೀ.ನವರೆಗೆ ಆಯ್ದ ಭಾಗದಲ್ಲಿ ಹೂಳು, ಜಂಗಲ್ ಹಾಗೂ ವೀಡ್ಸ್ ತೆಗೆಯುವ ಕಾಮಗಾರಿ | 1,97,220/- | 4935/- | 300/- | - " - |
| 4 | ಭದ್ರಾ ಬಲದಂಡೆ ಕಾಲುವೆ 19ನೇ ವಿತರಣಾ ನಾಲೆಯ ಸರಪಳಿ 0.80 ಕಿ.ಮೀ. ನಲ್ಲಿ ರಕ್ಷಣೆಯ ಕೆಲಸ ಹಾಗೂ ಸೋಪಾನಂ ನಿರ್ಮಿಸುವ ಕಾಮಗಾರಿ | 49,423/- | 1240/- | 200/- | ನಾಲ್ಕನೇ ದರ್ಜೆ ಮತ್ತು ಮೇಲ್ಪಟ್ಟು |
| 5 | ಭದ್ರಾ ಬಲದಂಡೆ ಕಾಲುವೆಯ 62.90ನೇ ಕಿ.ಮೀ.ನಲ್ಲಿರುವ ಅಂಡರ್ ಟನಲ್ ಹತ್ತಿರ ಕ್ಲಿಯರಿಂಗ್ ಹಾಗೂ ಡೀಪನಿಂಗ್ ಮಾಡುವ ಕೆಲಸ | 48,850/- | 1225/- | 200/- | - " - |
| 6 | ಭದ್ರಾ ಬಲದಂಡೆ ಕಾಲುವೆಯ 17ನೇ ವಿತರಣಾ ನಾಲೆಯ ಮೈನರ್ ಎಡಭಾಗದಲ್ಲಿ ಹೂಳು ತೆಗೆಯುವ ಕೆಲಸ | 49,476/- | 1240/ವ | 200/- | - " - |
| 7 | ಭದ್ರಾ ಬಲದಂಡೆ ಕಾಲುವೆಯ 22ನೇ ವಿತರಣಾ ನಾಲೆಯ ಎಸ್-7 ಬ್ರಾಂಚ್ ನಲ್ಲಿ ಪಿ.ಓ. ನಿರ್ಮಿಸುವ ಹಾಗೂ ಹೂಳು ತೆಗೆಯುವ ಕಾಮಗಾರಿ | 23,749/- | 595/- | 200/- | - " - |
| 8 | ಗೊಂದಿ ಕಾಲುವೆಯ ಸರಪಳಿ 67.10ನೇ ಕಿ.ಮೀ.ನ ಜಂಬರಘಟ್ಟ ಕೆರೆಯ ಬ್ರೀಚಡ್ ಪೊರ್ಷನ್ ದುರಸ್ತಿ ಕೆಲಸ. | 62,829/- | 1575/- | 200/- | - " - |
| 9 | ಗೊಂದಿ ಬಲದಂಡೆ ಕಾಲುವೆಯ ಅರತೊಳಲು ಗ್ರಾಮದ ಹತ್ತಿರ ಸರಪಳಿ 60.10ನೇ ಕಿ.ಮೀ. ನಲ್ಲಿ ಒಡೆದ ಭಾಗದ ದುರಸ್ತಿ | 49,000/- | 1230/- | 200/- | - " - |
| 10 | ಗೊಂದಿ ಕಾಲುವೆಯ ಕೆರೆಬೀರನಹಳ್ಳಿ ಗ್ರಾಮದ ಹತ್ತಿರ ರಕ್ಷಣೆಯ ಕೆಲಸದ ಕಾಮಗಾರಿ | 49.000/- | 1230/- | 200/- | - " - |
| 11 | ಜಂಬದಹಳ್ಳ ಯೋಜನೆಯ 3ನೇ ವಿತರಣಾ ನಾಲೆಯ ಸಿದ್ದರಹಳ್ಳಿ ಯಲಗೆರೆ ರಸ್ತೆಯ ಸರಪಳಿ 0.75ನೇ ಕಿ.ಮೀ. ನಲ್ಲಿ ಸೇರುವ ಸರ್ವೀಸ್ ರಸ್ತೆಯನ್ನು ಅಭಿವೃದ್ಧಿ ಮಾಡುವುದು. | 1,97,227/- | 4935/- | 300/- | ಮೂರನೇ ದರ್ಜೆ ಮತ್ತು ಮೇಲ್ಪಟ್ಟು |

**ಸೂಚನೆಗಳು:**

1) ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು.
2) ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ಬ್ಯಾಂಕರ್ಸ್ ಚೆಕ್, ಎಫ್.ಡಿ.ಆರ್. ಟಿ.ಡಿ.ಆರ್. ಮತ್ತು ಬ್ಯಾಂಕ್ ಗ್ಯಾರಂಟಿಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಮಾತ್ರ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್ ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟನ್ನು ಕಾರ್ಯಪಾಲಕ ಇಂಜಿನಿಯರ್ ಹೆಸರಿನಲ್ಲಿ ಪ್ಲೆಡ್ಜ್ ಮಾಡಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3) ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4) ಇಂ.ಎಂ.ಡಿ.ಯ ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) 90 ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5) ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ ಸ್ವೀಕರಿಸುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಇಂಜಿನಿಯರ್ ಇವರಿಗೆ ಇರುತ್ತದೆ.

7) ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8) ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ಧವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**

ಪಿ.ಆರ್. 677 ಕಾರ್ಯಪಾಲಕ ಅಭಿಯಂತರು, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**OFFICE OF THE EXECUTIVE ENGINEER P.W.D., KOLAR DIVISION, KOLAR**
**TENDER NOTIFICATION No: 21/2005-06, Dated: 14th November 2005**
**TENDER NOTIFICATION 1st CALL (In two cover system)**

Sealed Item Rate tenders for the works noted below under TWO COVER BID SYSTEM as per the Karnataka Transparency in public procurement act - 2000 in prescribed forms in duplicate is invited from class-I contractors registered in K.P.W.D/MORT&H approved firms. Two Cover bid system of tendering consists of Technical Bid and Financial Bid. These two covers shall be sealed and kept in another sealed cover duly super subscribing name of the cover and shall be addressed to the under signed with name and full postal address of the bidder. Completed bids will be received in the office of The Chief Engineer, C&B(S), Bangalore-1, Office of the Superintending Engineer PWD Bangalore circle, Bangalore-9 & O/o The Executive Engineer, PWD Kolar Division, Kolar up to 4.00 PM on 16.01.2006 and Technical Bids will be opened in the office of the under signed in presence of Bidders or Authorised representative on 17.01.2006 at 4.00 PM. The contractors who are qualified in technical bids their financial bids opening date will be intimated. The subject of conditions laid down in the form PWG.65, 66 of KPWD code Vol.II, special conditions contained in the schedules and in Karnataka Transparency in public procurement act 2000.

| Sl. No. | Name of Work | Approx. Amount put to tender in Lakhs | E.M.D. to be paid |
|---|---|---|---|
| | **ROAD WORKS** | | |
| 1 | Construction of Bridge across Palar River near Thangalakuppa on road joining Kangandalahalli, Ramasagara road and K.V. road in Bethamangala constituency Bangarpet Taluk, Kolar District. | 70.00 | 70000.00 |
| 2 | Improvements to road from Narenahalli to Nallakadaranahalli via Kodenahalli, Alavatta in Chikkaballapur constituency, Chikkaballapur Taluk, Kolar District. | 55.00 | 55000.00 |
| 3 | Improvements road from NH-7 to Ramaganaparthi via Kalkunte, Gollahalli, Kariganapalya in Chikkaballapur Constituency, Chikkaballapur Taluk, Kolar District. | 55.00 | 55000.00 |
| 4 | Improvements Irragmpalli to Srinivaspur Taluk Border via Kapali in Chintamani Constituency, Chintamani Taluk, Kolar District. | 55.00 | 55000.00 |
| 5 | Improvements to road from Holur to Mathikunte via Bennangoor, Annehalli in Kolar Constituency, Kolar Taluk. | 70.00 | 70000.00 |
| 6 | Improvements to road from Malur Masthi road to join D.N. Doddi in Malur constituency, Malur Taluk, Kolar District. | 60.00 | 60000.00 |
| 7 | Improvements Naganahalli to join A.P. Border via Rajendrahalli, Gaddur in Mulbagal constituency, Mulbgal Taluk, Kolar District. | 55.00 | 55000.00 |
| 8 | Improvements road from C.R.F. road to S.P. road via Nilatooru, Pathaballapalli in Srinivaspur constituency, Srinivaspur Taluk, Kolar District. | 99.50 | 99500.00 |
| 9 | Improvements road from Vemagal - Hosahalli road to Muthugadahalli via Nachahalli, Veerenahalli in Vemgal constituency, Chintamani Taluk, Kolar District. | 60.00 | 60000.00 |
| 10 | Improvements road from Garudanahalli to T. Purahalli via Boosnahalli, Shettihalli, Tokalaghatta in Vemagal constituency, Kolar Taluk, Kolar District. | 60.00 | 60000.00 |

| | | |
|---|---|---|
| A | Last Date of receipt of application for issue of tender forms 10.00 AM to 5.30 PM. | 12.11.2005 to 10.01.2006 |
| B | Date of issue of tender forms Morning 10.00 AM to evening 5.30 PM. | 10.01.2006 to 12.01.2006 |
| C | Date of submission of sealed tenders forms Morning 10.00 AM to evening 4.00 PM | 16.01.2006 |
| D | Cost of tender form per set (not refundable & Transferable) to be paid in cash or DD. | Rs.5000+ Other Taxes |
| E | Class of Registration of Contractors eligible to Tender. | Class-I |
| F | Time limit for completion of work including Monsoon. | 8 Months |

**GENERAL CONDITIONS:**

1. The Contractors interested in bidding for the works may submit an application to the under signed along with cost of tender documents (non refundable) to be paid in cash or in the form of DD drawn in favour The Executive Engineer, PWD Kolar Division, Kolar, payable at Kolar along with the application. The applicant should submit proof of registration, relevant experience certificate issued by the Officer not below the rank of Executive Engineer while submitting the application for Tender Schedules, otherwise the application may not be considered.

**CONDITIONS FOR TECHNICAL BIDS:**

1. The E.M.D. int the form of D.D./F.D.R./Pay Order/Bank Guarantee drawn from a Nationalized Bank or Scheduled Banks or NSC (Pledged in favour of the under signed) to be enclosed with the Technical Bid. The Bank Guarantee shall be in the form as prescribed in PWG 66 supplied with the tender form other wise tenders will be rejected all types of EMD should be valid for 180 Days from the date of opening fixed for the Tender other wise such tenders will be rejected.
2. Each Tender should have individually satisfactorily completed works of single similar nature of road work (By using Hot Mix plant 40/60 TPH & Paver Finisher) of value not less than 30% of the value of work in this notification (Updated at 10% per annum compoundable) in any one financial year during a block period of previous five years. The experience certificate in this regard should invariably have mention of nature/item of work executed, along with date of commencement and date of completion by the competent authority not below the rank of Executive Engineer, otherwise the technical bid is liable for disqualification. **(For Road works)**
3. 2.a Each Tender should have individually satisfactorily completed works of single similar nature Bridge work of value not less than 30% of the value of work in this notification (Updated at 10% per annum compoundable) in any one financial year during a block period of previous five years. The experience certificate in this regard should invariably have mention of nature/item of work executed, along with date of commencement and date of completion by the competent authority not below the rank of Executive Engineer, otherwise the technical bid is liable for disqualification. **(For Bridge works)**
4. For proof of Financial capacity Line of credit from any Scheduled Bank shall be invariably produced for the particular work in the proforma prescribed in the technical bid for an amount equal to 30% of amount put to tender. Failure to submit the line of credit along with Technical bid lead to disqualification.
5. **Special Note:** The defact liability period for the works in this notification will be (i) Three years (in case of strengthening, widening with strengthening works. (ii) Two years (in case of new formation not involving strengthening course, widening, renewal works & (iii) five years (in case of bridges and culverts) reckoned from the date of completion of the work.
6. All documents enclosed in support of Technical Bids shall be attested by the Notary, other wise the bids are liable for disqualification. The original documents should be produced for verification at any stage of tender process as and when sought for Failure to produce original documents leads to disqualification of technical bids.
7. Only relevant certificates and details shall be furnished with the technical bids Details of company/Agencies/Firms profile be enclosed.
8. Tendering by joint venture is not allowed.

9. The Competent authority reserves the right to reject any or all tenders without assigning any reasons.
10. The intending Tenderer should produce contractors registration passbook invariably at the time of purchasing blank tender forms otherwise blank tender's forms will not be issued.
11. Conditional tenders will not be accepted.
12. All documents enclosed as above shall be page numbered and index shall also be enclosed.
13. If any dates mentioned above happens to be Geneal Holiday, The next working day will hold good in lieu of the date mentioned.

**Any further details can be had from the Division Office on all working days during office hours.**

Executive Engineer,
P.R. 662 P.W.D. Kolar Division, Kolar.

**ಪ್ರಾಚಾರ್ಯರ ಕಾರ್ಯಾಲಯ, ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಖರೀದಿ:ಉಗ್ರಾಣ:ವಿವ.4:2001-02, ದಿನಾಂಕ: 1ನೇ ಡಿಸೆಂಬರ್ 2005**

**ವಿಷಯ:** ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ತುಮಕೂರು ಇಲ್ಲಿ ತಯಾರಿಸಲಾದ ಪೀಠೋಪಕರಣಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಮಾಡುವ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಪ್ರಕಟಣೆಗೆ ಲಗತ್ತಿಸಿರುವ ಅನುಸೂಚಿಯಲ್ಲಿರುವ ಈ ಸಂಸ್ಥೆಯಲ್ಲಿ ತಯಾರಿಸಲಾದ ಒಟ್ಟು 3 ವಿಧದ ಪೀಠೋಪಕರಣಗಳನ್ನು ಅವು ಯಾವ ಸ್ಥಿತಿಯಲ್ಲಿ ಇವೆಯೋ ಅದೇ ಸ್ಥಿತಿಯಲ್ಲಿ ದಿನಾಂಕ: 22.02.2006 ಬೆಳಿಗ್ಗೆ 11 ಗಂಟೆಗೆ ಈ ಸಂಸ್ಥೆಯ ಆವರಣದಲ್ಲಿ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ನಿರ್ಧರಿಸಲಾಗಿದೆ. ಆದ ಪ್ರಯುಕ್ತ ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವ ಬಿಡ್‌ದಾರರು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚೆ ರೂ.300-00 ಗಳನ್ನು ಇಡುಗಂಟಾಗಿ ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. ಈ ಬಹಿರಂಗ ಹರಾಜು ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

1) ಇಡಗಂಟು ಪಾವತಿ ಮಾಡಿದ ಅಂಗೀಕೃತ ಬಿಡ್‌ದಾರರು ಮಾತ್ರ ಈ ಹರಾಜಿನಲ್ಲಿ ಭಾಗವಹಿಸಬಹುದು.
2) ಬಹಿರಂಗ ಹರಾಜಿನ ನಂತರ ಹರಾಜಾದ ವಸ್ತುಗಳನ್ನು ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರ ಅನುಮತಿಯ ನಂತರ ವಿಲೇವಾರಿ ಮಾಡಲಾಗುವುದು.
3) ಹರಾಜಿನಲ್ಲಿ ಭಾಗವಹಿಸಿ ಸಫಲರಾದ ಬಿಡ್‌ದಾರರ ಠೇವಣಿ ಹಣವನ್ನು ಹರಾಜು ಮೊತ್ತಕ್ಕೆ ಹೊಂದಾಣಿಕೆ ಮಾಡಿಕೊಳ್ಳಲಾಗುವುದು ಮತ್ತು ಹರಾಜಿನಲ್ಲಿ ವಿಫಲರಾದವರ ಠೇವಣಿ ಹಣವನ್ನು ಅಂದೇ ಹರಾಜಿನ ನಂತರ ಹಿಂದಿರುಗಿಸಲಾಗುವುದು.
4) ಹರಾಜಿನಲ್ಲಿ ಸಫಲರಾದ ಬಿಡ್‌ದಾರರು ಹರಾಜಿನ ನಂತರ ಸ್ಥಳದಲ್ಲೇ 25 ರಷ್ಟು ಹಣವನ್ನು ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು.
5) ಬಿಡ್‌ದಾರರಿಂದ ಚೆಕ್‌ನ್ನು ಸ್ವೀಕರಿಸಲಾಗುವುದಿಲ್ಲ. ನಗದು ರೂಪದಲ್ಲಿ ಮಾತ್ರ ಹಣ ಪಾವತಿ ಮಾಡತಕ್ಕದ್ದು.
6) ಅಖೈರು ಬಿಡ್‌ದಾರರು ನಮ್ಮ ನಿರ್ದೇಶನಾಲಯದ ಅನುಮತಿ ದೊರೆತ ಕೂಡಲೇ ಹರಾಜಿನ ಒಟ್ಟು ಮೊತ್ತ ಹಾಗೂ ತತ್‌ಕಾಲದಲ್ಲಿ ಜಾರಿಯಲ್ಲಿ ಮಾರಾಟ ತೆರಿಗೆ ಹಾಗೂ ಸರ್‌ಚಾರ್ಜ್ ಇತ್ಯಾದಿಗಳನ್ನು ನಿಯಮಾನುಸಾರ ಪಾವತಿ ಮಾಡಿ ನಿಗದಿತ ಅವಧಿ ಒಳಗೆ ಅವರ ಸ್ವಂತ ಖರ್ಚಿನಲ್ಲಿ ಹರಾಜಾದ ವಸ್ತುಗಳನ್ನು ಸಾಗಿಸಿಕೊಳ್ಳತಕ್ಕದ್ದು.
7) ಅಖೈರು ಬಿಡ್‌ದಾರರು ನಿಗದಿಪಡಿಸಿದ ಅವಧಿಯೊಳಗೆ ಪೂರ್ತಿ ಹರಾಜು ಮೊತ್ತವನ್ನು ಪಾವತಿ ಮಾಡಿ ಹರಾಜಾದ ವಸ್ತುಗಳನ್ನು ಸಾಗಿಸಿಕೊಳ್ಳದಿದ್ದಲ್ಲಿ ಅಂಥ ಬಿಡ್‌ದಾರರು ಹರಾಜಿಗೆ ಮುನ್ನ ನೀಡಿದ್ದ ಇಡುಗಂಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಂಗೀಕರಿಸಿದ್ದ ಬಿಡ್‌ನ್ನು ರದ್ದುಗೊಳಿಸಲಾಗುವುದು.
8) ಹರಾಜನ್ನು ಒಪ್ಪುವ ಅಥವಾ ರದ್ದುಪಡಿಸುವ ಹಕ್ಕು ಅಂತಿಮವಾಗಿ ಹರಾಜು ಪ್ರಾಧಿಕಾರಕ್ಕೆ ಇರುತ್ತದೆ.
9) ಈ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಪ್ರಾಚಾರ್ಯರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ಪ್ರಾಚಾರ್ಯರು,
ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಿ.ಹೆಚ್.ರಸ್ತೆ, ತುಮಕೂರು.

**ಅನುಸೂಚಿ**

**ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ತುಮಕೂರು**

**ದಿನಾಂಕ: 22.2.2006 ರಂದು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಿರುವ ಈ ಸಂಸ್ಥೆಯಲ್ಲಿ ತಯಾರಿಸಲಾದ ಪೀಠೋಪಕರಣಗಳ ವಿವರಗಳು**

| ಕ್ರ.ಸಂ. | ವಸ್ತುಗಳ ವಿವರಗಳು | ಪರಿಮಾಣ |
|---|---|---|
| 1 | ಈಜಿ ಛೇರುಗಳು (ಜಿ.ಐ. ಪೈಪಿನಿಂದ ತಯಾರಿಸಲಾಗಿದೆ) | 05 ಸಂಖ್ಯೆಗಳು |
| 2 | ಟೀಪಾಯ್ (ಎಂ.ಎಸ್. ರೌಂಡ್‌ನಿಂದ ತಯಾರಿಸಲಾಗಿದೆ) | 02 ಸಂಖ್ಯೆಗಳು |
| 3 | ಛೇರುಗಳು (ಎಂ.ಎಸ್. ರೌಂಡ್‌ನಿಂದ ತಯಾರಿಸಲಾಗಿದೆ) | 02 ಸಂಖ್ಯೆಗಳು |

ಪ್ರಾಚಾರ್ಯರು,
ಪಿ.ಆರ್. 663 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಬಿ.ಹೆಚ್.ರಸ್ತೆ, ತುಮಕೂರು.

## ಪೊಲೀಸ್ ಇಲಾಖೆ

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು

## ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-1(3)106/2004-05, ದಿನಾಂಕ: 10ನೇ ನವೆಂಬರ್ 2005**

2003-04ನೇ ಸಾಲಿಗೆ ಪೊಲೀಸ್ ಇಲಾಖೆಗೆ ಅಗತ್ಯವಿರುವ 78 ವಿವಿಧ ಸಮವಸ್ತ್ರ ಮತ್ತು ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ ನಿಯಮ 2000 ರನ್ವಯ ಟೆಂಡರನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಲಾಗಿದೆ. ಟೆಂಡರಿನೊಂದಿಗೆ ಸರಬರಾಜು ಮಾಡಲಿರುವ ಸಾಮಗ್ರಿಯ ಮಾದರಿಗಳನ್ನು ಚರ್ಮದ ವಸ್ತುಗಳಾಗಿದ್ದಲ್ಲಿ 4 ಸಂಖ್ಯೆಯಲ್ಲಿ ಇತರ ವಸ್ತುಗಳಾಗಿದ್ದಲ್ಲಿ 2 ಸಂಖ್ಯೆಗಳಲ್ಲಿ ಸಲ್ಲಿಸಬೇಕಾಗಿರುತ್ತದೆ. ಮಾದರಿ ಸಾಮಗ್ರಿಗಳನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

1. 78 ವಿವಿಧ ಸಾಮಗ್ರಿಗಳ ಅಂದಾಜು ಮೌಲ್ಯ ರೂ.8.29 ಕೋಟಿ ಮತ್ತು ತೆರಿಗೆ ಪ್ರತ್ಯೇಕವಾಗಿರುತ್ತದೆ.
2. ಟೆಂಡರ್ ಅರ್ಜಿಯ ಬೆಲೆ ರೂ.200/ ಕಛೇರಿಯ ಕೆಲಸದ ಅವಧಿಯಲ್ಲಿ ಬೆಳಿಗ್ಗೆ 10 ರಿಂದ ಸಾಯಂಕಾಲ 4 ಗಂಟೆಯವರೆಗೆ ದಿನಾಂಕ: 18.11.2005 ರಿಂದ 16.1.2006 ರವರೆಗೆ ಪಡೆಯಬಹುದು. ಟೆಂಡರನ್ನು ಅಂಚೆಯ ಮೂಲಕ ಪಡೆಯಲು ಬಯಸುವವರು. ರೂ.200/-ಗಳಿಗೆ ಡಿ.ಡಿ.ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಸ್ವವಿಳಾಸದ ಲಕೋಟೆಯ ಮೇಲೆ ರೂ.50/-ರ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸತಕ್ಕದ್ದು.
3. ಸರಬರಾಜು ಮಾಡಲಿರುವ ಸಾಮಗ್ರಿಯ ಸೂಚಿಸಿದ ಬೆಲೆಯ ಒಟ್ಟು ಮೊತ್ತದ ಮೇಲೆ ಶೇ.2 ರಂತೆ ಇ.ಎಂ.ಡಿ. ಯನ್ನು ಡಿ.ಡಿ. ರೂಪದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು.
4. 2 ಕವರುಗಳಲ್ಲಿ ಟೆಂಡರನ್ನು (1ನೇ ಕವರಿನಲ್ಲಿ ಇ.ಎಂ.ಡಿ. ಹಾಗೂ ಇತರ ದಾಖಲಾತಿಗಳು, 2ನೇ ಕವರಿನಲ್ಲಿ ಸಾಮಗ್ರಿಯ ಬೆಲೆ ಪಟ್ಟಿ) ಮಾದರಿಗಳೊಂದಿಗೆ ದಿನಾಂಕ: 16.01.2006ರ ಸಾಯಂಕಾಲ 5-00 ಗಂಟೆಯೊಳಗಾಗಿ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರಸ್ಥಾನ1, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು. ನಿಗದಿತ ಅವಧಿಯ ನಂತರ ಸಲ್ಲಿಸುವ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
5. ಇ.ಎಂ.ಡಿ. ಮೊತ್ತದ ಡಿ.ಡಿ.ಯನ್ನು ಲಗತ್ತಿಸದೆ ಇರುವ (ಕರ್ನಾಟಕ ಸರ್ಕಾರದಿಂದ ವಿನಾಯಿತಿ ಹೊಂದಿದ ಹೊರತು) ಹಾಗೂ ಮಾದರಿಗಳೊಂದಿಗೆ ಸಲ್ಲಿಸದೆ ಇರುವ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
6. ಟೆಂಡರಿನ ಮೊದಲನೆಯ ಕವರನ್ನು ದಿನಾಂಕ: 17.1.2006 ರಂದು ಬೆಳಿಗ್ಗೆ 11 ಗಂಟೆಗೆ ತೆರೆಯಲಾಗುವುದು.
7. ಯಾವುದೇ ಕಾರಣವನ್ನು ನೀಡದೆ ಟೆಂಡರನ್ನು ಅಂಗೀಕರಿಸುವ/ತಿರಸ್ಕರಿಸುವ/ಮಾರ್ಪಡಿಸುವ ಹಕ್ಕನ್ನು ಇಲಾಖೆಯು ಕಾಯ್ದಿರಿಸಿ ಕೊಂಡಿರುತ್ತದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್
ಆಫ್ ಪೊಲೀಸ್, ಬೆಂಗಳೂರು.

ಪಿ.ಆರ್. 664

## ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-100

**ಪ್ರಕಟಣೆ ಸಂಖ್ಯೆ: ಬೆಂಕೇಕಾ/ಕಾ.ನಿ/6788/2005-06, ದಿನಾಂಕ: 25ನೇ ನವೆಂಬರ್ 2005**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಟೆಂಡರ್ ಆಧಾರದ ಮೇಲೆ ಸ್ಪರ್ಧಾತ್ಮಕ ದರಗಳನ್ನು ಕರೆದು 2005-06ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ಪಡೆಯಲು ಬಹಿರಂಗ ಹರಾಜನ್ನು ದಿನಾಂಕ: 29.12.2005 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 4000 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

**ಅಂಗಡಿ ಮಳಿಗೆಗಳು ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.**

| ಕ್ರ. ಸಂ. | ವಾಣಿಜ್ಯ ಮಳಿಗೆಯ ಹೆಸರು/ ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|---|---|
| 1 | ಉಪಹಾರ ಗೃಹ-06 | 6.85X6 (2 ಯೂನಿಟ್) | 11 ತಿಂಗಳು | 1,960/- | 19,600/- | 2,000/- |
| 2 | ಬೇಕರಿ-03 | 6.85X6 (2 ಯೂನಿಟ್) | 11 ತಿಂಗಳು | 1,960/- | 19,600/- | 2,000/- |
| 3 | ಸಲೂನ್-01 | 3.25X6 (1 ಯೂನಿಟ್) | 11 ತಿಂಗಳು | 980/- | 9,800/- | 1,000/- |
| 4 | ವರ್ಕ್‌ಶಾಪ್-10 | 3.25X6 (1 ಯೂನಿಟ್) | 11 ತಿಂಗಳು | 980/- | 9,800/- | 1,000/- |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳ ವಿವರಗಳು ಬೇಕಾಗಿದ್ದಲ್ಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು, ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು, ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಕಾರಾಗೃಹಗಳ ಉಪ ಮಹಾನಿರೀಕ್ಷಕರು,
ಕೇಂದ್ರ ಕಾರಾಗೃಹ, ಬೆಂಗಳೂರು.

ಪಿ.ಆರ್. 665

## ಉಪ ಕೃಷಿ ನಿರ್ದೇಶಕರ ಕಛೇರಿ (ವಾಣಿಜ್ಯ ಬೆಳೆಗಳು) ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು
## ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ಸಂಖ್ಯೆ: ಉಕೃನಿ/ವಾಬೆ/ವಾಹನ ವಿಲೇವಾರಿ/1/2005-06, ದಿನಾಂಕ: 2ನೇ ಡಿಸೆಂಬರ್ 2005**

**ವಿಷಯ:** ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಕೃಷಿ ನಿರ್ದೇಶನಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು ಕಛೇರಿಯ ವಾಹನ ಸಂಖ್ಯೆ: ಸಿಎಬಿ-785 ಮಹೇಂದ್ರ ಮಹೇಂದ್ರ ಜೀಪನ್ನು ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1 ರವರ ಕಛೇರಿಯ ವಾಹನ ಸಂಖ್ಯೆ: ಸಿಎಬಿ-785 ಮಹೇಂದ್ರ ಮಹೇಂದ್ರ ಜೀಪನ್ನು ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಈ ಕಾರ್ಯಾಲಯದ ಆವರಣದಲ್ಲಿ ವಾಹನ ನಿಲ್ಲಿಸಿರುವ ಸ್ಥಳದಲ್ಲಿ ಯಾವ ರೀತಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಚೆಯುಳ್ಳ ಸಾರ್ವಜನಿಕರು ಈ ಟೆಂಡರ್-ಕಂ-ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ವಿವರಗಳು ಕೆಳಕಂಡಂತಿರುತ್ತದೆ.

| ವಾಹನದ ಸಂಖ್ಯೆ ಮಾದರಿ | ವಿಕ್ರಯದ ಮಾದರಿ | ಟೆಂಡರ್ ಸ್ವೀಕರಿಸುವ ಸ್ಥಳ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಹರಾಜಿನ ದಿನಾಂಕ ಮತ್ತು ಸಮಯ | ಇಎಂಡಿ ಠೇವಣಿ | ಬಹಿರಂಗ ಹರಾಜು ಮಾಡುವ ಸ್ಥಳ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಸಿಎಬಿ-785 (ಡಿಸೇಲ್) 1980 ಮಾದರಿ | ಟೆಂಡರ್-ಕಂ-ಬಹಿರಂಗ ಹರಾಜು | ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಶೇಷಾದ್ರಿ ರಸ್ತೆ, ಬೆಂಗಳೂರು | 8.2.2006 ಮಧ್ಯಾಹ್ನ 12.00 ಘಂಟೆವರೆಗೆ | 8.2.2006 ಅಪರಾಹ್ನ 4.00 ಘಂಟೆಗೆ | ರೂ.5000=00 (ಐದು ಸಾವಿರ) ಕ್ರಾಸ್ ಮಾಡಿದ ಡಿ.ಡಿ. ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಬೆಂಗಳೂರು ರವರ ಹೆಸರಿನಲ್ಲಿ | ಕೃಷಿ ನಿರ್ದೇಶ ನಾಲಯದ ಆವರಣ ಶೇಷಾದ್ರಿ ರಸ್ತೆ, ಬೆಂಗಳೂರು-1 |

**ಷರತ್ತುಗಳು:**

1. ವಾಹನಕ್ಕೆ ಟೆಂಡರ್ ಸಲ್ಲಿಸುವವರು ಬಿಳಿಯ ಹಾಳೆಯಲ್ಲಿ ಗರಿಷ್ಠ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ರೂ.5000=00 ಗಳ ಕ್ರಾಸ್ ಮಾಡಿದ ಡಿ.ಡಿ. ಯನ್ನು ಲಗತ್ತಿಸಿ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ವಾಹನದ ನಂಬರನ್ನು ದಪ್ಪ ಅಕ್ಷರದಲ್ಲಿ ನಮೂದಿಸುವುದು ಮತ್ತು ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ಬರೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.
2. ದಿನಾಂಕ: 8.2.2006 ರಂದು ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಗಳನ್ನು ಬಿಡ್‌ದಾರರ ಹಾಗೂ ಟೆಂಡರುದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಆಖೈರು ಬಿಡ್ ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಠ ಮೊತ್ತವನ್ನು ಅಂಗೀಕರಿಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವರು ರೂ.5000/- (ರೂ. ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.
4. ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸಿದಲ್ಲಿ ರೂ.5000 ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸಬಹುದು.
5. ಯಶಸ್ವಿ ಬಿಡ್‌ದಾರರು / ಟೆಂಡರ್ ದಾರರು ಠೇವಣಿ ಮೊಗಲಗು ಹೊರತುಪಡಿಸಿ, ಗರಿಷ್ಠ ಬಿಡ್ / ಟೆಂಡರ್ ಮೊತ್ತದ ಶೇ.26 ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದ್ದಲ್ಲಿ ಅವರು ನೀಡಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಟೆಂಡರ್ ಹರಾಜನ್ನು ಸಂಬಂಧಿಸಿದ ಅಧಿಕಾರಿಯು ಅನುಮೋದಿಸಿದ ನಂತರ ಬಾಕಿ ಮೊತ್ತವನ್ನು ಮತ್ತು ನಿಯಮಾನುಸಾರ ತೆರಿಗೆಯನ್ನು ಈ ಕಛೇರಿಯ ತಿಳುವಳಿಕೆ ಪತ್ರ ಸ್ವೀಕರಿಸಿದ 10 ದಿನದೊಳಗೆ ಪಾವತಿಸಿ ತಮ್ಮ ಸ್ವಂತ ಖರ್ಚಿನಿಂದ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದ್ದಲ್ಲಿ ಅವರು ಪಾವತಿಸಿದ ಒಟ್ಟು ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಈ ಬಗ್ಗೆ ಯಾವುದೇ ಹಕ್ಕು ಅವರಿಗೆ ಇರುವುದಿಲ್ಲ.
6. ಯಶಸ್ವಿ ಬಿಡ್ : ಟೆಂಡರ್‌ದಾರರು ತಮ್ಮ ಖರ್ಚಿನಲ್ಲಿ ವಾಹನದ ಮಾಲೀಕತ್ವ ಬದಲಾವಣೆ ಮಾಡಿಕೊಳ್ಳತಕ್ಕದ್ದು.
7. ಯಶಸ್ವಿ ಬಿಡ್ : ಟೆಂಡರುದಾರರು ಹೊರತುಪಡಿಸಿ ಉಳಿದವರಿಗೆ ಠೇವಣಿ ಹಣ : ಡಿ.ಡಿ.ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಅವರಿಂದ ಲಿಖಿತ ಬೇಡಿಕೆ ನೀಡಿದ ತರುವಾಯ ಹಿಂದಿರುಗಿಸಲಾಗುವುದು.
8. ಹರಾಜು ಕೈಗೊಳ್ಳುವ / ರದ್ದುಪಡಿಸುವ / ಮುಂದೂಡುವ ಹಾಗೂ ಬಿಡ್ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.
9. ಎಲ್ಲಾ ವಿಷಯಗಳಲ್ಲಿ ಉಪ ಕೃಷಿ ನಿರ್ದೇಶಕರು, (ವಾಣಿಜ್ಯ ಬೆಳೆಗಳು) ಶೇಷಾದ್ರಿ ರಸ್ತೆ, ಬೆಂಗಳೂರು ಇವರ ತೀರ್ಮಾನವೇ ಅಂತಿಮವಾಗಿರುತ್ತದೆ. ಈ ತೀರ್ಮಾನಕ್ಕೆ ಎಲ್ಲಾ ಬಿಡ್‌ದಾರರು / ಟೆಂಡರ್‌ದಾರರು ಬದ್ಧರಾಗಿರಬೇಕಾಗಿರುತ್ತದೆ.
10. ವಾಹನವನ್ನು ಈಗ ಇದ್ದ ಪರಿಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು. ವಾಹನವನ್ನು ಕಛೇರಿ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಪಿ.ಆರ್. 668 ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳಗಳು) ಬೆಂಗಳೂರು.

